# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಕೆ.ಟಿ. ಶ್ರೀಕಂಠೇಗೌಡ,

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 811

ಉತ್ತರಿಸುವ ಸಚಿವರು : ಮಾನ್ಯ ಕೃಷಿ ಸಚಿವರು

ಉತ್ತರಿಸಬೇಕಾದ ದಿನಾಂಕ : 17-12-2018

| ಕ್ರ.ಸಂ. | ವಿಷಯ | ಉತ್ತರ |
|---|---|---|
| ಅ) | ಕೃಷಿ ವಿ.ಸಿ.ಫಾರಂ ಕೃಷಿ ಕೇಂದ್ರ, ಮಂಡ್ಯ ಇದರ ಒಟ್ಟು ವಿಸ್ತೀರ್ಣ ಎಷ್ಟು; | ಕೃಷಿ ವಿ.ಸಿ.ಫಾರಂ ಕೃಷಿ ಕೇಂದ್ರ, ಮಂಡ್ಯ ಇದರ ಒಟ್ಟು ವಿಸ್ತೀರ್ಣ 655.02 ಎಕರೆ. |
| ಆ) | ಈ ಕೇಂದ್ರದ ಎಷ್ಟು ಜಮೀನು ಅಕ್ಕ-ಪಕ್ಕದವರಿಂದ ಒತ್ತುವರಿಯಾಗಿದೆ; (ವಿವರ ನೀಡುವುದು) | ಗಾಣದಾಳು ಸರ್ವೆ ನಂ.100 ರಲ್ಲಿ 5 ರಿಂದ 6 ಎಕರೆ ಜಮೀನು ಒತ್ತುವರಿ ಮಾಡಿಕೊಂಡಿರುವ ಬಗ್ಗೆ ಕಾನೂನು ರೀತ್ಯ ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ) | ಈ ಒತ್ತುವರಿ ತೆರವಿಗೆ ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | 1. ಜಮೀನಿನ ಒತ್ತುವರಿ ಮಾಡುವುದನ್ನು ತಡೆಗಟ್ಟುವ ನಿಟ್ಟಿನಲ್ಲಿ ಕೇಂದ್ರದ ಸರಹದ್ದಿನಲ್ಲಿ ಚೈನ್ ಲಿಂಕ್ ಬೇಲಿಯನ್ನು 2010-11 ರಲ್ಲಿ 250 ಮೀ., 2013-14 ರಲ್ಲಿ 600 ಮೀ. 2017-18ನೇ ಸಾಲಿನಲ್ಲಿ 400 ಮೀ. ಬೇಲಿಯನ್ನು ಅಳವಡಿಸಲಾಗಿದೆ ಹಾಗೂ 2018-19 ನೇ ಸಾಲಿನಲ್ಲಿ 440 ಮೀ. ಚೈನ್ ಲಿಂಕ್ ಬೇಲಿಯನ್ನು ಅಳವಡಿಸಲು ಹಣಕಾಸು ಮಂಜೂರಾತಿಯನ್ನು ನೀಡಲಾಗಿದೆ.<br>2. ಗಾಣದಾಳು ಸರ್ವೆ ನಂ. 100 ರಲ್ಲಿ 194.19 ಎಕರೆ ಜಮೀನು ಮೂಲತಃ ಸರ್ಕಾರಿ ಗೋಮಾಳವಾಗಿದ್ದು, ಇದರ ಪೈಕಿ 141.32 ಎಕರೆ ಜಮೀನನ್ನು ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಇವರ ಹೆಸರಿಗೆ ಎಂ.ಆರ್ 39/2005-06 ಪ್ರಕಾರ ಮ್ಯೂಟೇಷನ್ ಅಂಗೀಕಾರವಾಗಿ ಆರ್.ಟಿ.ಸಿ. ಬಂದಿರುತ್ತದೆ. ಈ ಪೈಕಿ 5.25 ಎಕರೆ ಜಮೀನನ್ನು ಅಕ್ಕಪಕ್ಕದ ರೈತರು ಅಕ್ರಮ ದಾಖಲೆಗಳನ್ನು ನೀಡಿ ತಹಶೀಲ್ದಾರ್ ರವರಿಂದ ಮಂಜೂರು ಮಾಡಿಸಿಕೊಂಡು (ನಂ.ಎಲ್. ಎನ್.ಡಿ.ಸಿ.ಆರ್.37/86-87) ಸಾಗುವಳಿ ಮಾಡುತ್ತಿದ್ದಾರೆ. ಈ ಕುರಿತಂತೆ ನ್ಯಾಯಾಲಯದಲ್ಲಿ ದಾಖಲಿಸಿರುವ ಪ್ರಕರಣ ಸಂಖ್ಯೆ:ಆರ್.ಎ. 9-11/ 2010-11 ಪ್ರಕಾರ ಸರ್ವೆ ನಂಬರ್ 100 ಕ್ಕೆ ಸಂಬಂಧಿಸಿದಂತೆ ಉಪ ವಿಭಾಗಾಧಿಕಾರಿ, ಉಪ ವಿಭಾಗ, ಮಂಡ್ಯ ಇವರ ನ್ಯಾಯಾಲಯದಲ್ಲಿ ಕೂಲಂಕಷವಾಗಿ ಪರಿಶೀಲಿಸಿ ತಾಲ್ಲೂಕು ಸರ್ವೆಯರ್ ರವರಿಂದ ಅಳತೆ ಮಾಡಿಸಿ, ನಕ್ಷೆ ತಯಾರಿಸಿ ಪ್ರತಿವಾದಿಗಳಿಗೆ ಮಂಜೂರಾಗಿರುವುದು ಅರೆ ವ್ಯಾಪ್ತಿಯಾಗಿದ್ದಲ್ಲಿ ರದ್ದುಗೊಳಿಸುವ ಬಗ್ಗೆ ಸಕ್ಷಮ ಪ್ರಾಧಿಕಾರದ ಮುಂದೆ ಪ್ರಸ್ತಾವನೆ ಸಲ್ಲಿಸಲು ನಿಯಮಾನುಸಾರ ಕ್ರಮ ವಹಿಸಲು ಮಂಡ್ಯ ತಹಶೀಲ್ದಾರ್‌ರವರಿಗೆ ನಿರ್ದೇಶನ ನೀಡಲಾಗಿತ್ತು, 6 ಜನ ಪ್ರತಿವಾದಿಗಳು ದಿನಾಂಕ:04-12-2012ರ ಉಪ ವಿಭಾಗಾಧಿಕಾರಿಯವರ ಆದೇಶವನ್ನು ಪ್ರಶ್ನಿಸಿ ಜಿಲ್ಲಾಧಿಕಾರಿಯವರ |

| | | |
|---|---|---|
| | | ನ್ಯಾಯಾಲಯದಲ್ಲಿ ದಾವೆ ಸಲ್ಲಿಸಿದ್ದು, ನ್ಯಾಯಾಲಯವು ಉಪ ವಿಭಾಗಾಧಿಕಾರಿ, ಉಪ ವಿಭಾಗ ಮಂಡ್ಯ ರವರು ನೀಡಿರುವ ತೀರ್ಪು ಸಮಂಜಸವೆಂದು ತೀರ್ಮಾನಿಸಿ ಅಳತೆ ಮಾಡಲು ಆದೇಶ ನೀಡಿರುತ್ತಾರೆ.<br>3. ಆದರೆ ಶ್ರೀಮತಿ ಚನ್ನಾಜಮ್ಮ ಮತ್ತು ಶ್ರೀ ಬಿಳೀಗೌಡ ಇಬ್ಬರು ರೈತರು ಪ್ರತ್ಯೇಕವಾಗಿ Court of the PRL Civil Judge (Jr.DN) Mandya ಇವರಲ್ಲಿ ದಿನಾಂಕ:15-04-2010ರಲ್ಲಿ ದಾವೆ ಹೂಡಿದ್ದು (O.S. No. 517/2010 and O.S. No. 521/2010) ಸದರಿ ನ್ಯಾಯಾಲಯವು ನವೆಂಬರ್ 2015 ರಂದು ಅಳತೆ ಮಾಡದಂತೆ ಖಾಯಂ ತಡೆಯಾಜ್ಞೆ ನೀಡಿರುತ್ತಾರೆ. ಇದಕ್ಕೆ ಸಂಬಧಿಸಿದಂತೆ ತಡೆಯಾಜ್ಞೆ ಯನ್ನು ತೆರವುಗೊಳಿಸುವಂತೆ ಮೇಲ್ಮನವಿಯನ್ನು ಹಿರಿಯ ಸಿವಿಲ್ ನ್ಯಾಯಾಲಯ ಮಂಡ್ಯ ಇಲ್ಲಿ ದಿನಾಂಕ:11-01-2016ರಂದು (RA 29/2015, RA 30/2015 and RA 34/2015) ದಾವೆ ಹೂಡಲಾಗಿದ್ದು, ಈ ಮೂರು ಪ್ರಕರಣಗಳಲ್ಲಿ ಒಂದು ಪ್ರಕರಣಕ್ಕೆ (RA 34/2015) ಸಂಬಂಧಪಟ್ಟಂತೆ ಜಮೀನನ್ನು ಅಳತೆ ಮಾಡಲು ಘನ ನ್ಯಾಯಾಲಯವು ಆದೇಶವನ್ನು ನೀಡಿರುತ್ತಾರೆ. ಸದರಿ ಆದೇಶದ ಪ್ರಕಾರ ಆದಷ್ಟು ಶೀಘ್ರವಾಗಿ ಅಳತೆ ಮಾಡಿಸಿ, ಗಡಿ ರೇಖೆಯನ್ನು ಗುರುತಿಸುವಂತೆ ಮಾನ್ಯ ಜಿಲ್ಲಾಧಿಕಾರಿಗಳು ಹಾಗೂ ತಹಶೀಲ್ದಾರ್, ಮಂಡ್ಯರವರನ್ನು ಕೋರಲಾಗಿತ್ತು. ಅದರಂತೆ ಸರ್ವೆಯರ್, ಮಂಡ್ಯ ತಾಲ್ಲೂಕು ಇವರು ಅಳತೆ ಮಾಡುವ ಪ್ರಕ್ರಿಯೆಯನ್ನು ಕೈಗೊಂಡಿರುತ್ತಾರೆ. ಆದರೆ ಎರಡನೇ ಪ್ರಕರಣದಲ್ಲಿ (RA 29/2015) ಯಥಾಸ್ಥಿತಿ ಕಾಯ್ದುಕೊಳ್ಳಲು ಆದೇಶ ನೀಡಿರುತ್ತದೆ. ಮೂರನೇ ಪ್ರಕರಣಕ್ಕೆ ಸಂಬಂಧಿಸಿದಂತೆ (RA 30/2015) ಹಿರಿಯ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ಮಂಡ್ಯ ಇಲ್ಲಿ, ದಿನಾಂಕ:17.12.2018 ರಂದು ವಾದ-ಪ್ರತಿವಾದಕ್ಕೆ ನಿಗಧಿಪಡಿಸಲಾಗಿದೆ. |
| ಈ) | ಯಾವಾಗ ಒತ್ತುವರಿ ತೆರವು ಗೊಳಿಸಲಾಗುವುದು? | ಸದರಿ ಪ್ರಕರಣಗಳಲ್ಲಿ ಮಾನ್ಯ ಹಿರಿಯ ಸಿವಿಲ್ ನ್ಯಾಯಾಲಯ ಮಂಡ್ಯ ಎರಡು ಪ್ರತ್ಯೇಕ ಆದೇಶ ಹೊರಡಿಸಿರುವುದರಿಂದ ವಿಶ್ವವಿದ್ಯಾನಿಲಯವು ಸದರಿ ಪ್ರಕರಣಗಳನ್ನು ಘನ ಉಚ್ಚ ನ್ಯಾಯಾಲಯದಲ್ಲಿ ದಾವೆ ಹೂಡುವ ಪ್ರಕ್ರಿಯೆಯಲ್ಲಿದ್ದು, ಮಾನ್ಯ ನ್ಯಾಯಾಲಯದ ಅಂತಿಮ ತೀರ್ಪಿನಂತೆ ಮುಂದಿನ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: 74 ಕೃವಿಬೆ 2018

(ಎನ್.ಹೆಚ್. ಶಿವಶಂಕರ ರೆಡ್ಡಿ)
ಕೃಷಿ ಸಚಿವರು